# ಮೈಸೂರು ವಿ.ವಿ. 'ಅಸ್ಪೃಶ್ಯತೆ' ವಿರುದ್ಧ ಮುಷ್ಕರ

[ಪಂಚಮ ಪ್ರತಿನಿಧಿಯಿಂದ]

ವಿಶ್ವವಿದ್ಯಾನಿಲಯಗಳ ಉದ್ಯೋಗಗಳಲ್ಲಿ ಇಂದು ನೂರಕ್ಕೆ ಇಬ್ಬರಾದರೂ ನಿಮ್ನವರ್ಗದವರಿಲ್ಲ. ವಿದ್ಯಾವಂತರಿರುವ ಇಲ್ಲೇ ಒಂದೊಂದು ಜಾತಿಯವರು ಪಾರುಪತ್ತೆ ನಡೆಸುತ್ತ, ಅಸ್ಪೃಶ್ಯತೆ ಆಚರಿಸುವಂತಿದೆ. ಜಾತಿ ಸಡಿಲಗೊಂಡು ವರ್ಗವಾಗಲು ವಿದ್ಯಾವಂತರು ಅಡ್ಡ ನಿಂತಿರುವಂತಿದೆ. ಮೈಸೂರು ವಿಶ್ವವಿದ್ಯಾನಿಲಯದ ದಲಿತ ವಿದ್ಯಾರ್ಥಿ ಒಕ್ಕೂಟದ ನೇತೃತ್ವದಲ್ಲಿ ಅನೇಕ ದಲಿತ ಸಂಘ ಸಂಸ್ಥೆಗಳು 11ನವೆಂಬರ್ 78ರಿಂದಲೂ ವಿಶ್ವವಿದ್ಯಾನಿಲಯದ ಮುಂದೆ ನಾಲ್ಕು ಬೇಡಿಕೆಗಳ ಈಡೇರಿಕೆಗಾಗಿ ಧರಣಿ ನಡೆಸುತ್ತಿವೆ. ಆದರೆ ವಿಶ್ವವಿದ್ಯಾನಿಲಯದ ಆಡಳಿತ ವರ್ಗವು ಸತ್ಯಾಗ್ರಹಿಗಳತ್ತ ಕಣ್ಣಾಯಿಸದೆ ದಲಿತ ವಿರೋಧಿ ಧೋರಣೆ ತಳೆದಿರುವಂತಿದೆ.



ನಾವು ಹೊಟ್ಟೆ ಬಟ್ಟೆ ಕಟ್ಟಿ ನಮ್ಮ ಮಕ್ಕಳನ್ನು ಓದಿಸಿದರೂ ಇಲ್ಲೂ ಮೋಸ!!! ಎಂದು ವಿದ್ಯಾರ್ಥಿಗಳ ಹೋರಾಟವನ್ನು ಬೆಂಬಲಿಸಿ ಕಳೆದ ಡಿಸೆಂಬರ್ 4ರಂದು ದಲಿತ ಮಹಿಳೆಯರ ತಂಡವೊಂದು ಧರಣಿ ಮುಷ್ಕರ ನಡೆಸಿತು.

ಬೇಡಿಕೆಗಳು :

1. ಮೈಸೂರು ವಿಶ್ವವಿದ್ಯಾನಿಲಯವು ಕೀಳಾಗಿ ಕಂಡದ್ದಕ್ಕಾಗಿ ತನ್ನ ಕೆಲಸವನ್ನೇ ಕಳೆದುಕೊಂಡು ದಲಿತ ಜನಾಂಗಕ್ಕೆ ಗೌರವ ತಂದುಕೊಟ್ಟ ಜಯರಾಮಯ್ಯ ಅವರು ಸ್ನಾತಕೋತ್ತರ ಕೇಂದ್ರಕ್ಕೆ ಪುನರ್ ನೇಮಕ ಆಗಲಿ.

2. ದಲಿತರ ಮೀಸಲಾತಿ ಭರ್ತಿ ಆಗುವವರೆಗಾದರೂ ಹಂಗಾಮಿ ಅಥವಾ ಖಾಯಂ ಉದ್ಯೋಗವಕಾಶವು ದಲಿತರು ಮಾತ್ರ ಪಡೆಯುವಂಥ ಕಾನೂನಾಗಬೇಕು. ಜತೆಗೆ ಹಂಗಾಮಿ ಹುದ್ದೆ ಜಾಹೀರಾಗಬೇಕು.

[2ನೇ ಪುಟನೋಡಿ]

ಪಂಚಮ

ಸಂಪುಟ : 3 ಸಂಚಿಕೆ : 4 5, ಜನವರಿ 1979 ಪಾಕ್ಷಿಕ ಬೆಲೆ : 20ಪೈಸೆ

## ಲಂಡನ್‌ನಲ್ಲಿ ಪ್ರತಿಭಟನೆ

ಭಾರತದಲ್ಲಿ ದಿನನಿತ್ಯ ದಲಿತರ ಮೇಲೆ ನಡೆಯುತ್ತಿರುವ ದಬ್ಬಾಳಿಕೆ, ದೌರ್ಜನ್ಯಗಳನ್ನು ಖಂಡಿಸಿ ಲಂಡನ್‌ನಲ್ಲಿ ನೆಲೆಸಿರುವ ಭಾರತೀಯ ದಲಿತರು ಮತ್ತು ದಲಿತ ಹಿತೈಷಿಗಳು ಇತ್ತೀಚೆಗೆ ಭಾರತೀಯ ರಾಯಭಾರಿ ಕಛೇರಿ ಎದುರು ಪ್ರತಿಭಟನಾ ಪ್ರದರ್ಶನ ನಡೆಸಿದರು.

# ಸರ್ಕಾರಕ್ಕೊಂದು ಬಹಿರಂಗ ಪತ್ರ

ಸ್ವಾಮಿ,

ದಲಿತ ವಿದ್ಯಾರ್ಥಿ ಒಕ್ಕೂಟವು ಮೈಸೂರು ವಿಶ್ವವಿದ್ಯಾಲಯದ ಮುಂದೆ ಧರಣಿ ಉಪವಾಸ ನಡೆಸುತ್ತಿರುವುದನ್ನು, ಅದರ ಬೇಡಿಕೆಗಳನ್ನು ಈ ಹಿಂದೆಯೇ ತಮ್ಮ ಗಮನಕ್ಕೆ ತಂದಿದ್ದೇವೆ. ಇತ್ತೀಚೆಗೆ ಗುಜರಾತ್ ಸರ್ಕಾರವು ವಿಶ್ವವಿದ್ಯಾನಿಲಯಗಳ ಅಧ್ಯಾಪಕ ವೃತ್ತಿಗೆ ಶೇಕಡ 60ರಷ್ಟನ್ನು ನಿಮ್ನ ಜಾತಿ ಮತ್ತು ವರ್ಗಗಳಿಗೆ ಮೀಸಲಿಟ್ಟಿರುವುದು ತಮ್ಮ ಗಮನಕ್ಕೆ ಬಂದಿರುವುದು. ಅಸ್ಪೃಶ್ಯರು ಸಮಾಜದಲ್ಲಿ ಹೆಚ್ಚಾಗಿ ಒಡನಾಡಲು ಹಾಗೂ ಸಾಮಾಜಿಕ ಅವಮಾನ ಕಳೆದುಕೊಳ್ಳುವಂತಾಗಲು ಗುಜರಾತ್ ಸರಕಾರವು ಎದೆಗಾರಿಕೆಯ ಪ್ರಾಮಾಣಿಕ ಪ್ರಯತ್ನ ಮಾಡಿರುವುದನ್ನು ತಾವು ಅಭಿನಂದಿಸುತ್ತೀರಿ ಎಂದು ಭಾವಿಸುತ್ತೇವೆ. ಕರ್ನಾಟಕ ಸರಕಾರವೂ ಗುಜರಾತ್ ಸರ್ಕಾರದಂತೆಯೇ ಪ್ರಾಮಾಣಿಕ ಎದೆಗಾರಿಕೆಯಿಂದ ಶೇಕಡ 60ರಷ್ಟನ್ನು ದಲಿತರಿಗೆ ಮೀಸಲಿಡುವಂತೆ ಸದ್ಯಕ್ಕೆ ನಾವು ಒತ್ತಾಯಿಸುವುದಿಲ್ಲ. ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ನೂರಕ್ಕೆ ಇಬ್ಬರೂ ದಲಿತರು ಇಲ್ಲದ ಈ ನಾಚಿಕೆಗೇಡಿನ ಸಂದರ್ಭದಲ್ಲಿ, ಬಾಯಲ್ಲಿ ಹೇಳುತ್ತಿರುವ ದಲಿತರ 18ರಷ್ಟು ಮೀಸಲಾತಿ ಭರ್ತಿ ಆಗುವವರೆಗಾದರೂ ದಲಿತರಿಗೆ ಮಾತ್ರ ಉದ್ಯೋಗ ನೀಡಿರಿ

[2ನೇ ಪುಟನೋಡಿ]

# ವಿ. ವಿ. ಅಸ್ಪೃಶ್ಯತೆ ವಿರುದ್ಧ ಮುಷ್ಕರ

[ಒಂದನೇ ಪುಟದಿಂದ]

3. ಸ್ನಾತಕೋತ್ತರ ಅಥವಾ ಯಾವುದೇ ಅಧ್ಯಾಪಕ ವೃತ್ತಿಗೆ ದಲಿತರ ಕನಿಷ್ಠ ಅರ್ಹತೆಯು ಸ್ನಾತಕೋತ್ತರ ಎರಡನೇ ದರ್ಜೆಯ ಉತ್ತೀರ್ಣತೆ ಮಾತ್ರವಾಗಿರಲಿ. ಒಳ್ಳೆಯ ಅಕಾಡೆಮಿಕ್ ಕ್ಯಾರಿಯರ್, ಶೇ. 55 ಅಂಕಗಳಿಕೆ, ಅನುಭವ ಇತ್ಯಾದಿ ಹೆಸರಿನಲ್ಲಿ ದಲಿತರಿಗೆ ಉದ್ಯೋಗ ಸಿಗದಂತೆ ಮಾಡಿರುವ ಅಸ್ಪೃಶ್ಯತಾ ಕಾನೂನು ಕೊನೆಯಾಗಲಿ.

4. ಕಾಲೇಜುಗಳಲ್ಲಿ ಮತ್ತು ವಿದ್ಯಾರ್ಥಿನಿಲಯಗಳಲ್ಲಿ ಸೀಟುಗಳನ್ನು ಹಂಚುವಾಗ ಮೆರಿಟ್ ಇರುವ ದಲಿತ ವಿದ್ಯಾರ್ಥಿಗಳನ್ನು ಮೀಸಲಾತಿಗೆ ಸೇರಿಸುವ ವಂಚನಾ ಕ್ರಮ ನಿಲ್ಲಲಿ.

**ಪ್ರಾಧ್ಯಾಪಕರೊಡನೆ ಸಾಮೀಲು**

ದಲಿತ ಜನಾಂಗದ ಜಯರಾಮಯ್ಯ ಅವರು ಮೂರು ವರ್ಷಕಾಲ ಮಾನಸಗಂಗೋತ್ರಿ ಸಸ್ಯಶಾಸ್ತ್ರ ವಿಭಾಗದಲ್ಲಿ ಅಧ್ಯಾಪಕರಾಗಿ ಕೆಲಸಮಾಡಿ ಅರ್ಹತೆ, ಪ್ರತಿಭೆ ಹಾಗೂ ಅನುಭವ ಪಡೆದಿದ್ದರೂ 'ದಲಿತವಿರೋಧಿ ವಿಶ್ವವಿದ್ಯಾನಿಲಯವು ಪ್ರಾಧ್ಯಾಪಕರೊಡನೆ ಸಾಮೀಲಾಗಿ' ಅವರನ್ನು ಕೆಲಸದಿಂದಲೇ ವಜಾಮಾಡಿದೆ.

ಜಯರಾಮಯ್ಯ ಅವರಿಗೆ ಸಲ್ಲಬೇಕಾದ ಸ್ಥಳಾವಕಾಶಕ್ಕೆ ಪ್ರಬಲ ಕೋಮಿನ ಅನನುಭವಿ ಅಭ್ಯರ್ಥಿಯನ್ನು ನೇಮಿಸಿಕೊಂಡಿರುವ ಮೈಸೂರು ವಿಶ್ವವಿದ್ಯಾನಿಲಯದ ವರ್ತನೆಯ ಬಗ್ಗೆ ರಾಜ್ಯ ದಲಿತ ಸಂಘರ್ಷ ಸಮಿತಿಯ ಅನೇಕ ಶಾಖೆಗಳು, ಕೊಳ್ಳೇಗಾಲದ ದಲಿತ ವಿದ್ಯಾರ್ಥಿಗಳು ಮತ್ತು ಮೈಸೂರಿನ ಅನೇಕ ದಲಿತ ಸಂಘ ಸಂಸ್ಥೆಗಳು ಖಂಡಿಸಿವೆ. ಅನೇಕ ನಿರ್ಬಂಧಗಳ ಮೂಲಕ ತಮ್ಮ ನಿರುದ್ಯೋಗಿ ಸಹೋದರರನ್ನು ಬೀದಿಯಲ್ಲೇ ಉಳಿಸಲು ಹೊರಟಿರುವ ವಿಶ್ವವಿದ್ಯಾನಿಲಯದ ದಲಿತ ವಿರೋಧಿ ಧೋರಣೆ ವಿರುದ್ಧ ಸತ್ಯಾಗ್ರಹ ಮತ್ತಿತರ ಕಾರ್ಯಗಳ ಮೂಲಕ ಬೆಂಬಲ ವ್ಯಕ್ತಪಡಿಸುತ್ತಿವೆ.

ಎರಡನೇ ತಿಂಗಳಲ್ಲಿ ಚಳವಳಿ ಮುಂದುವರೆದಿದ್ದರೂ ದಲಿತರ ಕೂಗಿನತ್ತ ಕಿವಿಗೊಡದ ವಿಶ್ವವಿದ್ಯಾನಿಲಯದ ಪ್ರತಿಗಾಮಿ ಧೋರಣೆ ಖಂಡಿಸಲು ರಾಜ್ಯಾದ್ಯಂತ ಚಳವಳಿಯನ್ನು ತೀವ್ರಗೊಳಿಸುವ ಯತ್ನಗಳು ನಡೆಯುತ್ತಿವೆ.



## ದಲಿತ ನುಡಿ

ಗುಲಾಮನೊಬ್ಬನ ಅಂತರಂಗದಲ್ಲಿ ಗುಲಾಮತನದ ವಿರುದ್ಧವಾಗಿ ಕ್ರೋಧಾಗ್ನಿ ಭುಗಿಲ್ಲೆಂದು ಕೆರಳದೇ ಇರುವವರೆಗೂ ಆತನಿಗೆ ವಿಮೋಚನೆ ಇಲ್ಲ.

**—ಡಾ|| ಬಿ. ಆರ್. ಅಂಬೇಡ್ಕರ್**

## ........ಬಹಿರಂಗ ಪತ್ರ

[ಒಂದನೇ ಪುಟದಿಂದ]

ಎಂಬ ಸಾಧಾರಣ ಬೇಡಿಕೆ ಮುಂದಿಟ್ಟು ಧರಣಿ ಮಾಡುತ್ತಿದ್ದೇವೆ. ಆದರೆ ಈಗ ಅಲ್ಲಿ ಏನಾಗುತ್ತಿದೆ? ಇರುವ ಅಲ್ಲೊಬ್ಬ ಇಲ್ಲೊಬ್ಬ ದಲಿತನನ್ನು ವಿಶ್ವವಿದ್ಯಾನಿಲಯ ಕೆಲಸದಿಂದಲೇ ತೆಗೆಯುತ್ತಿದೆ. ಮುಂದೆ ಯಾವ ದಲಿತನೂ ವಿಶ್ವವಿದ್ಯಾನಿಲಯದ ಅಧ್ಯಾಪಕವೃತ್ತಿಗೆ ಬರದಂತೆ ವಿಶ್ವವಿದ್ಯಾನಿಲಯವು ದಲಿತ ಅಭ್ಯರ್ಥಿಗೆ–ಒಳ್ಳೆಯ ಅಕಾಡೆಮಿಕ್ ಕ್ಯಾರಿಯರ್ ಹೆಸರಿನಲ್ಲಿ ಅಡೆತಡೆಗಳನ್ನೊಡ್ಡಿ ಅಸ್ಪೃಶ್ಯರಹಿತ ವಿಶ್ವವಿದ್ಯಾನಿಲಯ ಮಾಡಲು ಹೊರಟಿದೆ. ಈಗ ನೂರಾರು ಉದ್ಯೋಗಗಳಿಗೆ ಸಂದರ್ಶನಗಳು ನಡೆಯುತ್ತಿರುವುದರಿಂದ ಈಗಲಾದರೂ ಸಾಮಾಜಿಕ ನ್ಯಾಯ ಉಳಿಸಲು ಕಾರಣರಾಗಿ. ಸಂದರ್ಶನಗಳು ಮುಗಿದ ಮೇಲೆ ತಾವು ಆದೇಶ ನೀಡಿದರೆ ಮನೆ ಸುಟ್ಟಾದ ಮೇಲೆ 'ಮನೆಗೆ ಬೆಂಕಿ ಇಡಬೇಡಿ' ಎಂದು ಕಾನೂನು ತಂದಂತಾಗುವುದರಿಂದ ತಾವು ಈ ತಕ್ಷಣವೇ ಪ್ರವೇಶಿಸಿ ಎಂದು ಕೋರುತ್ತೇವೆ.

**—ದಲಿತ ವಿದ್ಯಾರ್ಥಿಗಳು**

ಮೈಸೂರು

# ದಲಿತ ವಿದ್ಯಾರ್ಥಿಗಳ ಮೇಲೆ ಪೋಲೀಸರ ಕ್ರೂರ ದೌರ್ಜನ್ಯ

[ಪಂಚಮ ಪ್ರತಿನಿಧಿಯಿಂದ]

ಇಂದಿರಾ ಗಾಂಧಿಯವರ ಬಂಧನ ವಿರೋಧಿಸಿ ನಗರದಲ್ಲಿ ಕಳೆದ ಡಿಸೆಂಬರ್ 19ರಂದು ರಾತ್ರಿ ನಡೆದ ಗೂಂಡಾಗಳ ದಬ್ಬಾಳಿಕೆ ಪ್ರತಿಭಟನೆಯು ಬೀದಿಗಿಳಿಯಿತು. ಕಂಡಕಂಡ ಕಡೆಯಲೆಲ್ಲ ಕಲ್ಲೆಸೆಯುವವರಿಗೆ ಪೋಲೀಸರ ಬೆಂಬಲ ಸಿಕ್ಕಿತು. ಆದರೆ ಮೌನ ಪ್ರೇಕ್ಷಕರಾಗಿ ಗಲಭೆ ಮಧ್ಯೆ ಸಿಕ್ಕಿಕೊಂಡವರಿಗೆ ಲಾಠಿ ಏಟು, ಅಶ್ರುವಾಯು ಷೆಲ್ ಪ್ರಯೋಗ.

ಬೆಂಗಳೂರಿನ ಮಹಾತ್ಮ ಗಾಂಧೀ ರಸ್ತೆಯಲ್ಲಿನ ಸರ್ಕಾರಿ 2ನೇ ಹರಿಜನ ವಿದ್ಯಾರ್ಥಿ ನಿಲಯದ ನಾಲ್ಕಾರು ವಿದ್ಯಾರ್ಥಿಗಳು ತಮ್ಮ ವಿದ್ಯಾರ್ಥಿ ನಿಲಯದ ಸರಹದ್ದಿನಲ್ಲೆ ನಿಂತು ಅಂತಹ ಘಟನೆಯೊಂದನ್ನು ವೀಕ್ಷಿಸುತ್ತಿದ್ದರು. ಮೌನ ಪ್ರೇಕ್ಷಕರಾಗಿದ್ದ ವಿದ್ಯಾರ್ಥಿಗಳನ್ನು ಓಡಿಸಿಕೊಂಡು ಸುಮಾರು 20 ಮಂದಿಯಷ್ಟು ಪೋಲೀಸ್ ತಂಡ ಹಾಸ್ಟೆಲಿಗೆ ನುಗ್ಗಿತು. ಕೈಗೆ ಸಿಕ್ಕಿದ ವಿದ್ಯಾರ್ಥಿಗಳಿಗೆ ಲಾಠಿ, ಬೆಲ್ಟ್‌ಗಳಿಂದ ಮೈ ಸುಲಿಯುವ ಹಾಗೆ ಕ್ರೂರವಾಗಿ ಥಳಿಸಿದ್ದಾರೆ.

**ಚರ್ಮ ಸುಲಿದಿದೆ**

ಈ ಘಟನೆಯನ್ನು ತಿಳಿದು ಪಂಚಮ ಪ್ರತಿನಿಧಿ ಅಲ್ಲಿಗೆ ಹೋದಾಗ ಕಂಡದ್ದು ಪೋಲೀಸರ ಅಮಾನುಷ ವರ್ತನೆಯ ಅಟ್ಟಹಾಸ. ಇವರ ಹೊಡೆತಗಳಿಗೆ ಸಿಕ್ಕಿದ ಸುಮಾರು ಹತ್ತು ಮಂದಿ ವಿದ್ಯಾರ್ಥಿಗಳ ಮೈ ಕೈ ಚರ್ಮ ಸುಲಿದಿದೆಯಲ್ಲದೆ ಊದಿಕೊಂಡಿತ್ತು.

ಸುಮಾರು 20 ಮಂದಿ ಪೋಲೀಸರ ಈ ಕ್ರೂರ ವರ್ತನೆಯಲ್ಲಿ ಸಬ್ ಇನ್ಸ್‌ಪೆಕ್ಟರೊಬ್ಬರೂ ಸೇರಿದ್ದರೆಂದು ಹೇಳಲಾಗಿದೆ. ರಾತ್ರಿ ಸುಮಾರು 10–30 ಗಂಟೆ ಸಮಯ. ಕೆಲವರು ಊಟ ಮಾಡಿದ್ದರು. ಇನ್ನೂ ಕೆಲವರು ಓದುತ್ತಿದ್ದರು. ಮತ್ತೆ ಕೆಲವರು ಮಲಗಲು ರೆಡಿಯಾಗುತ್ತಿದ್ದರು. ಆ ಸಮಯದಲ್ಲಿ ಪೋಲೀಸರು ಹಾಸ್ಟೆಲಿನ ಮೇಲೆ ದೌರ್ಜನ್ಯ ಎಸಗಲು ನುಗ್ಗಿದರು. ಬೂಟುಗಾಲಿನ ಧಬ ಧಬ ಶಬ್ದಕ್ಕೆ ಬೆಚ್ಚಿದ ವಿದ್ಯಾರ್ಥಿಗಳು ಬೋಲ್ಟ್ ಹಾಕಿ ತಮ್ಮ ತಮ್ಮ ರೂಮಿನಲ್ಲಿ ಜೀವ ಹಿಡಿದು ಕುಳಿತರು.

ರಾಕ್ಷಸ ಅವತಾರದಲ್ಲಿ ಬಂದ ಪೋಲೀಸರು

[ಕೊನೆಯ ಪುಟ ನೋಡಿ]

## ತುಮಕೂರಿನಲ್ಲಿ ಸಂಘರ್ಷ

**[ಪಂಚಮ ಪ್ರತಿನಿಧಿಯಿಂದ]**

ಕಳೆದ ಡಿಸೆಂಬರ್ 2 ರಂದು ತುಮಕೂರಿನಲ್ಲಿ ನಡೆದ ಚಲನ ಚಿತ್ರ ನಟ–ನಟಿಯರ ಸಮಾರಂಭವೊಂದರಲ್ಲಿ ಸಂಭವಿಸಿದ ಗಲಭೆಯಲ್ಲಿ ಪೋಲೀಸರು ಲಾಠಿ ಪ್ರಹಾರ, ಅಶ್ರುವಾಯು ಷೆಲ್ ಸಿಡಿಸಿದರು. ಸಮಾರಂಭ ನಡೆದ ಸ್ಥಳಕ್ಕೆ ಹತ್ತಿರದಲ್ಲಿರುವ ಮಹಾತ್ಮ ಗಾಂಧೀ ರಸ್ತೆಯ ದಲಿತ ವಿದ್ಯಾರ್ಥಿ ನಿಲಯಗಳಿಗೆ ಪೋಲೀಸರು ಅಂದು ರಾತ್ರಿ ಅತಿಕ್ರಮವಾಗಿ ನುಗ್ಗಿ ವಿದ್ಯಾರ್ಥಿಗಳನ್ನು ಚೆನ್ನಾಗಿ ಥಳಿಸಿದರಲ್ಲದೆ ಅಶ್ರುವಾಯು ಷೆಲ್ ಸಿಡಿಸಿದರು. ಷೆಲ್ ಸಿಡಿತದಿಂದ ವಿದ್ಯಾರ್ಥಿಯೊಬ್ಬ ಗಾಯಗೊಂಡ.

ಪೋಲೀಸರ ಈ ಅಮಾನವೀಯ ದೌರ್ಜನ್ಯ ಖಂಡಿಸಿ ಡಿಸೆಂಬರ್ 6ರಂದು ತುಮಕೂರಿನ ದಲಿತ ಸಂಘರ್ಷ ಸಮಿತಿ ಶಾಖೆಯು ಪ್ರತಿಭಟನಾ ಪ್ರದರ್ಶನ ನಡೆಸಿತು. ವಿದ್ಯಾರ್ಥಿ ನಿಲಯಗಳ ಮೇಲಿನ ಪೋಲೀಸ್ ದೌರ್ಜನ್ಯದ ಬಗ್ಗೆ ಸಮಗ್ರ ತನಿಖೆ ಮತ್ತು ಆ ಘಟನೆಗೆ ಸಂಬಂಧಿಸಿದ

## ಸಮಿತಿ ಪ್ರತಿಭಟನೆ

ಪೋಲೀಸ್ ಸಿಬ್ಬಂದಿಯನ್ನು ಕೂಡಲೇ ವಜಾ ಮಾಡಬೇಕೆಂದು ಅದು ಒತ್ತಾಯಪಡಿಸಿತು.

## ಅಂಬೇಡ್ಕರ್ ಬೋರ್ಡ್ ಬಲಿ

ಇಂದಿರಾಪರ ಪ್ರತಿಭಟನೆ ಮಾಡುತ್ತಿದ್ದ ಗುಂಪೊಂದು ಡಿ20ರಂದು ಬೆಂಗ್ಳೂರಿನ ಶ್ರೀರಾಂಪುರದಲ್ಲಿ ಕಂಡಕಡೆಯಲೆಲ್ಲ ಕಲ್ಲು ತೂರುತ್ತ ಲೂಟಿ ಮಾಡಿಕೊಂಡು ಇಂದಿರಾಗೆ ಜಯಕಾರ ಹಾಕಿಕೊಂಡು ಹಿಗ್ಗಿ ಬರುತ್ತಿದ್ದ ದುಷ್ಟರ ಕಣ್ಣಿಗೆ ಡಾ॥ ಬಿ. ಆರ್. ಅಂಬೇಡ್ಕರ್ ಸಹಕಾರ ಸಂಘದ ನಾಮಫಲಕ ಬಿತ್ತು.

ಆ ಬೋರ್ಡನ್ನು ಕಂಡಕೂಡಲೆ ಆ ಗುಂಪು "ಈ ಬೋಳೀ ಮಗ್ನಲ್ವ ಇಂಥ ಕಾನೂನೆಲ್ಲ ಮಾಡ್ದವ್ನ" ಎಂದು ದಲಿತರನ್ನೆಲ್ಲ ಸಿಕ್ಕಾಬಟ್ಟೆ ಬೈದು 'ಅದ್ನ ಕಿತ್ತಾಕಿ' ಎಂದಿತು. ಒಂದೇ ಸಮನೆ ಹತ್ತದಿನ್ನೈದು ಜನ ಬೋರ್ಡನ್ನು ಕಿತ್ತು ನಜ್ಜುಗುಜ್ಜು ಮಾಡಿ ತುಳಿದು ಬಿಸಾಡಿ 'ಇಂದಿರಾಗೆ ಜೈ' ಎಂದು ಹೋದರು. []



ಪಂಚಮ

# ದಲಿತರಿಗೆ ಶಸ್ತ್ರಾಸ್ತ್ರ ಸ್ವಾಗತಾರ್ಹ

ಬಿಹಾರ ಈಗ ಬೆಂಕಿ, ಹುದ್ದೆ ಮೊಸಲಾತಿ ಅದಕ್ಕೆ ತುಪ್ಪ. ಈ ಮಧ್ಯೆ ಶ್ರೀಮಂತ ಜಮೀನ್ದಾರಿಗಳಿಗೂ ಹರಿಜನರಿಗೂ ನಿರಂತರವಾಗಿ ಘರ್ಷಣೆಗಳು ನಡೆಯುತ್ತಿವೆ, ಹರಿಜನರ ತಲೆಗಳು ಉರುಳುತ್ತಿವೆ; ನೆತ್ತರು ಹರಿಯುತ್ತಿದೆ. ಬೆಲ್ಚಿಯಂತಹ ಹತ್ಯಾಕಾಂಡಗಳು ಈಗಾಗಲೆ ಬಜಿತ್‌ಪುರ, ಕೈಲಾ, ಪತಡ್ಡ, ಬಿಸ್‌ರಾಂಪುರ, ಬಿಹಾರಿಶರೀಫ್, ರತ್ಲಂ ಮುಂತಾದ ಸ್ಥಳಗಳಲ್ಲಿ ಮರುಕಳಿಸಿವೆ. ಇದಲ್ಲ ಆಗುತ್ತಿರುವುದು ಶ್ರೀಮಂತ ಜಮೀನ್ದಾರರಿಂದ.

ಭಾರತದ ರಾಜಕೀಯದಲ್ಲಿ ಗಣನೀಯ ವ್ಯಕ್ತಿತ್ವ ಪಡೆದಿರುವ ಬಿಹಾರದವರೇ ಆದ ಜಯಪ್ರಕಾಶ ನಾರಾಯಣ, ಜಗಜೀವನ ರಾಂ ಮತ್ತು ಭೋಲಾ ಪಾಸ್ವಾನ್ ಶಾಸ್ತ್ರಿ ಅವರಿಂದಲೂ ಘಟನೆಗಳನ್ನು ತಡೆಯಲು ಸಾಧ್ಯವಾಗಿಲ್ಲ. ವಿಪರ್ಯಾಸವೆಂದರೆ ಅವರು ಆ ಪ್ರಯತ್ನವನ್ನೂ ಮಾಡುತ್ತಿಲ್ಲವೆಂದೇ ಹೇಳಬಹುದು.

ಸರ್ಕಾರವಂತೂ ಈ ಬಗ್ಗೆ ವೈಯಕ್ತಿಕವಾಗಿ ಸಂಪೂರ್ಣ ವಿಫಲಗೊಂಡಿದೆ. ಆದರೂ ಮುಖ್ಯಮಂತ್ರಿ ಕರ್ಪೂರಿ ಠಾಕೂರ್ 'ರಕ್ಷಣೆಗಾಗಿ' ಎಂದು ಹರಿಜನರಿಗೆ, ಆದಿವಾಸಿಗಳ ಕೈಗೆ ಶಸ್ತ್ರಾಸ್ತ್ರ ನೀಡಲು ಮುಂದೆ ಬಂದಿದ್ದಾರೆ. ಇಂದಿನ ಪರಿಸ್ಥಿತಿಯಲ್ಲಿ ಸರ್ಕಾರವೇ ಶಸ್ತ್ರಾಸ್ತ್ರ ನೀಡುವುದು ಅಷ್ಟು ಸುಲಭ ಸಾಧ್ಯವಾದುದಲ್ಲ. ಆದರೂ ಅಂತಹ ಅನಿವಾರ್ಯತೆ ಈಗ ಕರ್ಪೂರಿ ಠಾಕೂರ್ ಅವರಿಗೆ ಬಂದಿದೆ. ಅದಕ್ಕಾಗಿ ಆ ಸಾಹಸಕ್ಕೆ ಅವರು ಕೈಹಾಕಿದ್ದಾರೆ. ಇದು ಸ್ವಾಗತಾರ್ಹ. ಇದರಿಂದಾಗಿ ಜೀವಹಿಡಿದು ಕೂತಿರುವ ಅಲ್ಲಿನ ದಲಿತರಿಗೆ ಕೊಂಚ ಧೈರ್ಯ ಬಂದಿರದೆ ಇರಲಾರದು. ಜತೆಗೆ ದಲಿತರಿಗೆ ಯಮದೂತರಾಗಿರುವ ಶ್ರೀಮಂತ ಜಮೀನ್ದಾರಿಗಳಿಗೂ ಭೀತಿ ಉಂಟಾಗಿರುವುದನ್ನು ಅಲ್ಲಗಳೆಯಲಾಗದು. ಶ್ರೀಮಂತ ಕೊಲೆಗಡುಕರ ಬಂದೂಕುಗಳಿಗೆ ಬಲಿಯಾಗುತ್ತಿದ್ದ ದಲಿತರು ಈಗ ಅವರ ಬಲಿಯನ್ನು ಕೇಳುವಂತಾಗಿದೆ. ಇನ್ನು ಗುಂಡಿಗೆ ಗುಂಡು ರಕ್ತಕ್ಕೆ ರಕ್ತ. ಕರ್ಪೂರಿ ಅವರು ಈ ಕೆಲಸವನ್ನು ಹಿಂದೇ ಮಾಡಿದ್ದರೆ ಎಷ್ಟೋ ದಲಿತರ ಉಸಿರು ಉಳಿಯುತ್ತಿತ್ತು.

ಪ್ರಧಾನಿ ಮೊರಾರ್ಜಿ ದೇಸಾಯಿ ಕರ್ಪೂರಿ ಅವರ ನಿಲುವನ್ನು ಸ್ವಾಗತಿಸಿದ್ದಾರೆ. ಆದರೆ ದಿನ ಬೆಳಗಾದರೆ ಹರಿಜನರ ಉದ್ಧಾರ, ರಕ್ಷಣೆ ಕುರಿತು ಬೋಳೀ ಭಾಷಣ, ಘೋಷಣೆ ಮಾಡುವ ಇಂದಿರಾಗಾಂಧಿ ಬಿಹಾರ ಸರ್ಕಾರದ ಈ ನಿರ್ಧಾರ 'ದುರದೃಷ್ಟಕರ' ಎಂದು ವಿರೋಧಿಸಿದ್ದಾರೆ. ಆಕೆಯ ನಿಜವಾದ ಕಳಕಳಿ–ಹಿಪಾಕ್ರಸಿಯನ್ನು ದಲಿತರು ಈಗ ತೂಗಿ ನೋಡಬೇಕಾಗಿದೆ.

ಇತ್ತ ಕರ್ನಾಟಕದಲ್ಲಿ ದೇವರಾಜ ಅರಸರು ಒಂದು 'ಪರಿಹಾರ ಕಾರ್ಯ' ಹಾಕಿದ್ದಾರೆ. ದೌರ್ಜನ್ಯಗಳು ಸಂಭವಿಸದಂತೆ ತಡೆಯುವ ಬದಲು, ದೌರ್ಜನ್ಯಗಳಿಗೆ ಒಳಗಾಗಿ ನೊಂದ ಹಾಗೂ ಸತ್ತ ಹರಿಜನರ ಕುಟುಂಬಗಳಿಗೆ ಒಂದಿಷ್ಟು ಧನ ಸಹಾಯ ನೀಡಿ ಕಣ್ಣೊರೆಸುವ ಹುಸಿಯಾಸೆ ತೋರಿದ್ದಾರೆ.

ಕರ್ನಾಟಕದ ಈ 'ಪರಿಹಾರ'ವು ದಲಿತರ ಮೇಲಿನ ಅತ್ಯಾಚಾರ, ದೌರ್ಜನ್ಯ, ಕೊಲೆ ಇತ್ಯಾದಿ ಘಟನೆಗಳು ಪೋಲೀಸ್ ಮತ್ತು ಕೋರ್ಟುಗಳಲ್ಲಿ ಸಾಬೀತಾದಾಗ ಮಾತ್ರ. ಇಂತಹ ಅಪರಾಧಗಳು ಈವರೆಗೆ ಎಷ್ಟು ಸಾಬೀತಾಗಿವೆ? ಎಷ್ಟು ಮಂದಿ ಅಪರಾಧಿಗಳಿಗೆ ಜೈಲು, ಶಿಕ್ಷೆಯಾಗಿದೆ? ಹಾಗಾದರೆ ನೊಂದ ಕುಟುಂಬಗಳಿಗೆ ಮತ್ತೆಲ್ಲಿಯ ಪರಿಹಾರ? ಪರಿಹಾರದ ಹೆಸರಿನಲ್ಲಿ ದಲಿತರ ಬಂಡಾಯ ಮನೋಭಾವವನ್ನು ಉಪಶಮನಗೊಳಿಸುವ ಯತ್ನವಷ್ಟೆ.

ಹಾಗಾದರೆ ಶಸ್ತ್ರಾಸ್ತ್ರ ನೀಡುವ ಕರ್ಪೂರಿ ಅವರ ಕಾರ್ಯಕ್ರಮದಿಂದ ಸಂಪೂರ್ಣ ದಲಿತೋದ್ಧಾರವಿದೆ ಎಂದರ್ಥವಲ್ಲ. ದಲಿತರ ಉಸಿರುಳಿಯಲು ಅದೊಂದು ತಾತ್ಕಾಲಿಕ ಕ್ರಮವಷ್ಟೆ. ಎಲ್ಲಾ ರಾಜ್ಯಗಳೂ ಈಗ ಅದನ್ನು ಅನುಸರಿಸಬೇಕು. ಅಲ್ಲಿ ಈವರೆಗೆ ದಲಿತರ ಮೇಲೆ ನಡೆದಿರುವ ಘಟನೆಗಳೆಲ್ಲ ಭೂವಿವಾದಕ್ಕೆ ಸಂಬಂಧಿಸಿದಂಥವು. ಆದ್ದರಿಂದ ದಲಿತರಿಗೆ ಸಂಪೂರ್ಣ ಭೂಒಡೆತನದ ಹಕ್ಕು-ರಕ್ಷಣೆ ಅಗತ್ಯ. ಅದಾಗದ ಹೊರತು ದಲಿತರಿಗೆ ಕೊಲೆ, ಸುಲಿಗೆಗಳಿಂದ ಬಿಡುಗಡೆ ಇಲ್ಲ.

## ಹರಿಜನರಿಗೆ ಶಸ್ತ್ರಾಸ್ತ್ರ : ಇಂದಿರಾ ವಿರೋಧ

ಆತ್ಮರಕ್ಷಣೆ ಸಲುವಾಗಿ ಹರಿಜನರಿಗೆ ಶಸ್ತ್ರಾಸ್ತ್ರ ನೀಡಲು ಬಿಹಾರ ಸರ್ಕಾರ ಪರ್ಯಾಲೋಚಿಸುತ್ತಿರುವುದು ಅತ್ಯಂತ ದುರಾದೃಷ್ಟಕರ. ಇದರಿಂದ ಹಿಂಸಾಕೃತ್ಯಕ್ಕೆ ಬಹಿರಂಗ ಆಹ್ವಾನವಿತ್ತಂತಾಗುತ್ತದೆ ಎಂದು ಇಂದಿರಾಗಾಂಧಿ ಅವರು ಹೈದರಾಬಾದಿನಲ್ಲಿ ಡಿಸೆಂಬರ್ 29ರಂದು ಇಲ್ಲಿನ ಸಾರ್ವಜನಿಕ ಸಭೆಯನ್ನುದ್ದೇಶಿಸಿ ಮಾತನಾಡುತ್ತಾ ತಿಳಿಸಿದರು.

[ಪಿ.ಟಿ.ಐ. 31-12-78]

# ಬಿಹಾರದ

ಬೆಲ್ಚಿಯಂತಹ ಘೋರ ಹತ್ಯಾಕಾಂಡದ ನ
ಬಿಹಾರದ ಬೇಗುಸರಾಯ್ ಜಿಲ್ಲೆಯ ಬಜಿತ
ರದಲ್ಲಿ ಕಳೆದ ನವೆಂಬರ್ 15ರಂದು ಹರಿಜ
ಮೇಲೆ ಮತ್ತೊಂದು ಅಮಾನುಷವಾದ ದೌರ್ಜ
ನಡೆಯಿತು. ಈ ಘಟನೆಯನ್ನು 'ಹರಿಜನರ
ಯುವನ್ನಾಗಿ ಮಾಡಬಾರದೆಂದು' ಇತ್ತೀ
ಲೋಕಸಭೆಯಲ್ಲಿ ಪ್ರಧಾನಿ ಮೊರಾರ್ಜಿ ದೇಸಾ
ಯವರು ಪೂರ್ವಪರಿಶೀಲನೆ ಇಲ್ಲದೆ ತಳ್ಳಿ
ಬಿಟ್ಟರು. ಆದರೆ ಮುಂಬೈನ ಟೈಮ್ಸ್ ಆ
ಇಂಡಿಯಾ ಪತ್ರಿಕೆಯ ವಿಶೇಷ ವರದಿಗಾರ ಪಿ
ಗಾಂಧೀ ಅವರು ಘಟನೆ ಸಂಭವಿಸಿದ ಕೂಡ
ಬಜಿತ್‌ಪುರಕ್ಕೆ ಧಾವಿಸಿ ಕಣ್ಣಾರೆ ಕಂಡ ದೃಶ್ಯ
'ಇದು ಎರಡನೇ ಬೆಲ್ಚಿ ಪ್ರಕರಣ' ವೆಂದು
ದಿದ್ದಾರೆ.

ಸ್ಥಳೀಯ ಭೂಮಾಲೀಕನೊಬ್ಬನು ಶಸ್ತ್
ಹೊಂದಿದ ಸುಮಾರು 400 ಮಂದಿ ಬಾ
ದಾಂಡಿಗರನ್ನು 162 ಕುಟುಂಬಗಳಿರುವ
ಗ್ರಾಮದ ಹರಿಜನರ ಮೇಲೆ ಅನಿರೀಕ್ಷಿತ
ಭಯಂಕರ ದಾಳಿ, ದೌರ್ಜನ್ಯ ನಡೆಸಿದ. ಈ

# ಅಗ್ರಹಾರ ಘಟ

ಕೋಲಾರ ಜಿಲ್ಲೆ ಅಗ್ರಹಾರ ಗ್ರಾಮದಲ್ಲಿ 1
ನವೆಂಬರ್ 19ರಂದು ದಲಿತರ ನಡುವೆ ಘಷ
ಯಾಗಿ ಒಬ್ಬ ಜೀತಗಾರ ಸತ್ತು 13 ಮ
ಗಾಯಗೊಂಡರು. 'ಇದು ಹರಿಜನರ ನಡು
ಘರ್ಷಣೆ' ಇದಕ್ಕೂ ಸವರ್ಣೀಯರಿಗೂ ಯ
ದೇ ಸಂಬಂಧವಿಲ್ಲವೆಂದು ಪೋಲೀಸ್ ಹಾ
ವ್ಯವಸ್ಥೆಯ ಮುಖವಾಣಿಗಳಾದ ಪತ್ರಿಕೆ
ಪ್ರಚಾರ ಮಾಡಿದವು. ಆದರೆ ಹತ್ತು ವರ್ಷ
ದೀಚೆಗೆ ಅಗ್ರಹಾರದಲ್ಲಿನ ಆಗು ಹೋಗ
ಪರಿಚಯವಿರುವ ಯಾರೇ ಆಗಲಿ ಅದ
ನಂಬಲು ಸಾಧ್ಯವಿಲ್ಲ.

ಈ ದುರಂತ ಘರ್ಷಣೆಯನ್ನು ಕೆದಕುತ್ತಾ ಹ
ದಲ್ಲಿ ನಮ್ಮ ಜನಾಂಗದ ಎಲ್ಲ ಬಗೆಯ ದೌ
ನ್ಯಗಳು ಈಗಷ್ಟೇ ಕಣ್ಣು ಬಿಡುತ್ತಿರುವ
ಗೊಂದು ಪಾಠ ಕಲಿಸುತ್ತದೆ. ನಾವು ಕಡೆಗ

# ...ಜಿತ್‌ಪುರ, ಕೈಲಾದಲ್ಲಿ 'ಬೆಲ್ಚಿ' ಪುನರಾವರ್ತನೆ

...ಯಲ್ಲಿ ಅಂದು ಹರಿಜನನೊಬ್ಬ ಸತ್ತ, ಮತ್ತು ... ಮಂದಿ ತೀವ್ರ ಗಾಯಗೊಂಡರು.

**...ಹಿಳೆಯರ ಮೇಲೆ ಅತ್ಯಾಚಾರ**

...ರ್ಜನ್ಯಕಾರರು ಇಡೀ ಗ್ರಾಮವನ್ನು ಲೂಟಿ ...ಡಿ; ಹರಿಜನರ ಮನೆಗಳನ್ನು ಸಂಪೂರ್ಣ ...ಸ ಮಾಡಿದ್ದಾರೆ. ಹಳ್ಳಿಯಲ್ಲಿದ್ದ ಸುಮಾರು ...1 ದನಕರುಗಳನ್ನು ಅಪಹರಿಸಲಾಗಿದೆ. ಹಳ್ಳಿ ... ಮೇಲೆ ದಾಳಿ ಎಸಗಿದ ಸಂದರ್ಭದಲ್ಲಿ ದುಷ್ಕೃ...ಕಾರರು ಹರಿಜನರ ಮೂವರು ಮಹಿಳೆಯರ ...ಲೆ ಅಮಾನುಷ ರೀತಿಯಲ್ಲಿ ಒಬ್ಬರಾದ ...ತರ ಒಬ್ಬರಂತೆ ಸಾಮೂಹಿಕ ಅತ್ಯಾಚಾರ ನಡೆ...ಲ್ಲದೆ, ಒಂಬತ್ತು ಮಂದಿ ಮಹಿಳೆಯರನ್ನು ...ರವಾಗಿ ಥಳಿಸಿದರು. ಇಪ್ಪತ್ತಾರು ಮಂದಿ...ನ್ನು ಬೆತ್ತಲೆಗೊಳಿಸುವ ಮತ್ತಿತರ ರೀತಿಯಲ್ಲಿ ...ಮಾನಗೊಳಿಸಿದರು. ದುಷ್ಕೃತ್ಯಕಾರರ ಕಾಮ...ಬಲಿಯಾದವರು ಒಟ್ಟು ಹತ್ತು ಮಂದಿ ಮಹಿ...ಳರು. ಇವರಲ್ಲಿ ಮೂರು ಮಂದಿ ಈವರೆಗೆ ...ರೆಯಾಗಿದ್ದಾರೆ.

ಕಣ್ಮರೆಯಾಗಿರುವ ಮಹಿಳೆಯರನ್ನು ಆ ದುಷ್ಕೃತ್ಯಕಾರರೇ ಅಪಹರಿಸಿರಬಹುದೆಂದು ಕೆಲವು ಹಳ್ಳಿಗರ ಹೇಳಿಕೆ. ಅತ್ಯಾಚಾರಕ್ಕೊಳಗಾದ ಅವರು ಅವಮಾನಿತರಾಗಿ ಬಾವಿಗೆ ಬಿದ್ದು ಜೀವ ಕಳೆದುಕೊಂಡಿರಬಹುದೆಂದು ಕೆಲವರು ವ್ಯಕ್ತಪಡಿಸುವ ಶಂಕೆ.

**ಗರ್ಭಿಣಿಗೆ ಗರ್ಭಪಾತ**

ದುಷ್ಕೃತ್ಯಕಾರರ ಕಾಮಕ್ಕೆ ಬಲಿಯಾದ ಮತ್ತೊಬ್ಬ ನತದೃಷ್ಟೆ ಮಂಜು ಎಂಬ 18 ವರ್ಷದ ತುಂಬು ಗರ್ಭಿಣಿ ಯುವತಿ. ಹಳ್ಳಿಯಮಧ್ಯೆ ಬೀದಿಯಲ್ಲೇ ಆಕೆಯ ಮೇಲೆ ಒಬ್ಬರಾದ ಮೇಲೆ ಒಬ್ಬರಂತೆ ಸಾಮೂಹಿಕ ಅತ್ಯಾಚಾರ ನಡೆಸಿದರು. ಅಮಾನುಷ ರೀತಿಯಲ್ಲಿ ದೈತ್ಯರ ಅತ್ಯಾಚಾರಕ್ಕೊಳಗಾದ ಹರೆಯದ ಆ ತುಂಬುಗರ್ಭಿಣಿಗೆ ಕೊನೆಗೆ ಗರ್ಭಪಾತವಾಯಿತು.

ಭೂಮಾಲೀಕನಿಂದಾದ ಈ ಕ್ರೂರ ದೌರ್ಜನ್ಯದಲ್ಲಿ ಅನೇಕ ಮಂದಿ ಗಂಡಸರೂ ಕಣ್ಮರೆಯಾಗಿದ್ದು, ದುಷ್ಕೃತ್ಯಕಾರರೇ ಅವರನ್ನು ಕೊಂದಿರಬಹುದೆಂದು ಅಥವಾ ಒತ್ತೆಯಾಳುಗಳನ್ನಾಗಿರಿಸಿಕೊಂಡಿರಬಹುದೆಂದು ಹೇಳಲಾಗುತ್ತಿದೆ.

**ಸಮಷ್ಟಿಪುರದ ಅಬ್ಬರ**

ಸಮಷ್ಟಿಪುರ ಜಿಲ್ಲೆ ಗಡಿಯಲ್ಲಿರುವ ಬಜಿತ್‌ಪುರದಲ್ಲಿ ಶೋಷಕ ಸವರ್ಣೀಯ ಭೂಮಾಲೀಕ ಹರಿಜನರ ಮೇಲೆ ನಡೆಸಿದ ಕ್ರೂರ ದೌರ್ಜನ್ಯ ಚುನಾವಣೆಯ ಅಬ್ಬರದಲ್ಲಿದ್ದ ಆಡಳಿತ ವರ್ಗಕ್ಕೆ ಕಿಂಚಿತ್ತೂ ತಟ್ಟಲಿಲ್ಲ. ಅಲ್ಲಿಗೆ ಯಾವ ಪ್ರಮುಖನೂ ಕಾಲಿಡಲಿಲ್ಲ. ಅಲ್ಲದೆ ಆ ಘಟನೆಯ ಬಗೆಗೆ ಅಲ್ಲಿನ ಯಾವ ಪ್ರಮುಖ ಪತ್ರಿಕೆಗಳೂ ತಮ್ಮ ಲೇಖನಿಯನ್ನು ಓಡಿಸಲಿಲ್ಲ. ಒಂದು ದಿನದ ನಂತರ ಸ್ಥಳೀಯ ಹಿಂದಿ ದೈನಿಕವೊಂದು ಮಾತ್ರ ವರದಿ ಮಾಡಿತು. ಅಂತೆಯೇ ಘಟನೆ ನಡೆದ ಒಂದು ದಿನದ ನಂತರ ಪೋಲೀಸರು ಅಲ್ಲಿಗೆ ಧಾವಿಸಿದರು. ಅಲ್ಲಿ ಅವರು ಕಂಡದ್ದು ಸಾಮೂಹಿಕ ಅತ್ಯಾಚಾರಕ್ಕೆ ಬಲಿಯಾಗಿ ಇನ್ನೂ ಚೇತರಿಸಿಕೊಳ್ಳಲಾಗದೆ ಅರೆಪ್ರಜ್ಞಾವಸ್ಥೆಯಲ್ಲಿದ್ದ ಮೂವರು ಮಹಿಳೆಯರ ಗೋಳಾಟ ಮತ್ತು ರಕ್ತಮಯವಾಗಿದ್ದ ಅವರ ಒಳಲಂಗ, ಚಿಂದಿಯಾಗಿದ್ದ ಸೀರೆಗಳು. ಜೊತೆಗೆ ದುಷ್ಕೃತ್ಯಕಾರರ ದಾಳಿಯಿಂದ ಮನೆಗಳಲ್ಲಿದ್ದ ಅಷ್ಟಿಷ್ಟು ಆಹಾರಧಾನ್ಯಗಳ ಲೂಟಿಯಿಂದ ತಿನ್ನಲೂ ಏನೂ ಇಲ್ಲದೆ ಹಸಿದ ಹೆಂಗಸು-ಮಕ್ಕಳ ಚೀರಾಟ.

ಹರಿಜನರಿಗೆ ಸೇರಿದ ಸುಮಾರು 80 ಹೆಕ್ಟೇರು ಭೂಮಿಯನ್ನು ಅಕ್ರಮವಾಗಿ ಸಾಗುವಳಿ ಮಾಡುತ್ತಿರುವ ಭೂಮಾಲೀಕನ ವಿರುದ್ಧ ಆ ಗ್ರಾಮದ ಜನರು ಅಡ್ಡಿಪಡಿಸಿ ಸರ್ಕಾರಕ್ಕೆ ದೂರು ನೀಡಿದ್ದೇ ಈ ಘಟನೆಗೆ ಕಾರಣವೆಂದು ಪೋಲೀಸರ ಹೇಳಿಕೆ.

## ಕೈಲಾ ಘಟನೆ:

ಬಿಹಾರದ ನಳಂದ ಜಿಲ್ಲೆಯು ಹರಿಜನರ ಹತ್ಯಾಕಾಂಡಕ್ಕೆ ಬೆಲ್ಚಿಯಂತೆ ಪ್ರಸಿದ್ಧಿ. ಕೈಲಾ ಎಂಬ ಗ್ರಾಮದಲ್ಲಿ ಇತ್ತೀಚೆಗೆ ಹಾಡು ಹಗಲಲ್ಲೇ ಮೂವರು ಹರಿಜನರ ಶಿರಗಳನ್ನು ಕಡಿದು ಹಾಕಲಾಯಿತು. ಡಿಸೆಂಬರ್ 9ರಂದು ಹರಿಜನ ಕೇರಿಗೆ ಸವರ್ಣೀಯ ಶೋಷಕ ಭೂ ಮಾಲೀಕನ ಆಯುಧ ಹೊಂದಿದ್ದ ಗುಂಪೊಂದು ದಾಳಿಮಾಡಿತು. ಬೆಲ್ಚಿ, ಬಿಸರಾಮ್‌ಪುರ, ಪತಡ್ಡದಲ್ಲಿರುವಂತೆ ಕೈಲಾದಲ್ಲೂ ಅಂತಹ ಕೊಲೆಗಡುಕರ ಗುಂಪಿದೆ.

[7ನೇ ಪುಟನೋಡಿ]

# ದಲಿತರಿಗೆ ಒಂದು ಪೂರಕ ಪಾಠ

...ಸ ಅಥವಾ ಸೋತಿರುವ ಜಾಗಗಳನ್ನು ಗುರು... ಕೊಡುತ್ತದೆ.

**...ಗತಿ**

...ಹಾರ ಮಾಲೂರು ತಾಲ್ಲೂಕಿನ ಒಂದು ... ಸುಮಾರು ನೂರೆಂಟು ಮನೆಗಳಿರುವ ... ದಲಿತರವು ಮೂವತ್ತು. ಇಲ್ಲಿಯ ದಲಿತ

**ಕೆ. ರಾಮಯ್ಯ**

... ಸ್ಥೂಲವಾಗಿ ಎರಡು ಗುಂಪಾಗಿ ವಿಂಗಡಿ...ಸುದು. (1) ಆರ್ಥಿಕವಾಗಿ, ಶೈಕ್ಷಣಿಕವಾಗಿ ...ಂದುವರೆದ 'ಶಕ್ತ ದಲಿತರು'. (2) ಆರ್ಥಿಕ... ಹಿಂದುಳಿದ ಬಹುತೇಕ ಅನಕ್ಷರಸ್ಥ 'ಅಶಕ್ತ ...ತರು'.

...ದಲ ಗುಂಪಿಗೆ ಸೇರಿಸಬಹುದಾದ ಒಂದೇ

ಒಂದು ಮನೆಯಲ್ಲಿ ಮೂವರು ವಿದ್ಯಾವಂತರಿದ್ದು ಇಬ್ಬರೂ ಪದವೀಧರರು. ಇವರಲ್ಲೊಬ್ಬ ಕೆ.ಇ.ಬಿ. ಇಲಾಖೆಯಲ್ಲಿ ಮೊದಲ ದರ್ಜೆ ಗುಮಾಸ್ತ, ಎಂ.ಎಸ್‌ಸ್ಸಿ., ಆದ ಇನ್ನೊಬ್ಬ ನಿರುದ್ಯೋಗಿ. ಮತ್ತೊಬ್ಬ ವಿದ್ಯಾರ್ಥಿ (ಈಗ ಮೂವರೂ ಬಂಧನದಲ್ಲಿದ್ದಾರೆ).

ಇನ್ನುಳಿದವರು 'ಅಶಕ್ತ ದಲಿತರ' ಗುಂಪಿನವರು. ಇವರಲ್ಲಿ ಒಬ್ಬಾತ ಪೋಲೀಸ್ ಹುದ್ದೆಯಿಂದ ಮೊನ್ನೆಯಷ್ಟೇ ಬಡ್ತಿ ಪಡೆದು ಎಸ್. ಐ. ಆಗಿದ್ದಾನೆ. ಬಹುಮಂದಿ ಭೂಹೀನ ಕೃಷಿ ಕೂಲಿಗಳು. ಒಂದಿಬ್ಬರು ತುಂಡು ನೆಲದ ಒಡೆತನ ಹೊಂದಿದ್ದರೂ ಬರುವ ಉತ್ಪಾದನೆಯಿಂದ ಬದುಕು ಸಾಗುವುದಿಲ್ಲ. ಜೀತ, ಕೂಲಿಯಿಂದ ಮಾತ್ರ ಇವರಮನೆಯ ಒಲೆಗಳು ಕಿಚ್ಚು ಕಾಣುವುದು.

[6ನೇ ಪುಟನೋಡಿ]

# ದಲಿತರ ಒಡಲಾಳದ ಹಾಡುಗಾತಿ ಕು|| ರತ್ನಮ್ಮ

ತಾ|| 12–2–78ರಂದು ಕೋಲಾರದಲ್ಲಿ ನಡೆದ ಮೂರನೇ "ದಲಿತ ಯುವಜನ ಸಮ್ಮೇಳನ"ದಲ್ಲಿ ನೆರೆದಿದ್ದ ಸಾವಿರಾರು ಜನ ಈ ಮುಗ್ಧ ಬಾಲಕಿಯ ಕೊರಳ ಕರೆ ಕೇಳಿ ರೋಮಾಂಚಿತರಾದರು. ಅವರ ದಮನಿಗಳಲ್ಲಿ 'ಹೋರಾಟ'ದ ನೆತ್ತರು ದುಮುಗುಟ್ಟಿತು.

ಕೋಲಾರದ ವಿದ್ಯಾರ್ಥಿನಿಲಯದಲ್ಲಿದ್ದುಕೊಂಡು ಇನ್ನೂ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿರುವ ರತ್ನಮ್ಮ ಹುಟ್ಟಿದ್ದು ಯಡಹಳ್ಳಿಯಲ್ಲಿ. ತಂದೆ ದಿನವೆಲ್ಲಾ ತಂಬೂರಿ ಹಿಡಿದು ದೇವರನಾಮ ಹಾಡುತ್ತಾ ಬಜನೆಯಲ್ಲಿ ನಿರತನಾದರೆ, ತಾಯಿ ಗಂಜಿಗಾಗಿ ಭೂಮಾಲೀಕರ ಹೊಲಗದ್ದೆಗಳಲ್ಲಿ ದಿನಗೂಲಿಗೆ ದುಡಿಯುತ್ತಾಳೆ.

ತಂದೆಯು ದನಿ 'ವಂಚಿತ ಸಮುದಾಯ'ವನ್ನು



## ದಲಿತ ಪ್ರತಿಭೆ

ಮತ್ತಷ್ಟು ಜಿಗುಪ್ಸೆಗೊಳಿಸಿ ವಿರಕ್ತರನ್ನಾಗಿಸಿ ಪ್ರತಿಭಟನಾ ಕುಡಿಗಳನ್ನೇ ಚಿವುಟಿ ಹಾಕಿದರೆ ಈಕೆಯ ಕೊರಳು ಅವರಲ್ಲಿ ಪ್ರಜ್ಞೆ ಮೂಡಿಸಿ ಚೈತನ್ಯ ತುಂಬಿ ಕ್ರಿಯಾಶೀಲ ಹೋರಾಟಕ್ಕೆ ಅಣಿಗೊಳಿಸುತ್ತಿದೆ. ತನ್ನ ಕಂಠ ದಲಿತ ಜನರ ದುಃಖ ದುಮ್ಮಾನಗಳಿಗಾಗಿ ಮೀಸಲು ಎನ್ನುತ್ತಾಳೆ ರತ್ನಮ್ಮ. 'ಶೋಷಿತ ಪ್ರಜ್ಞೆ' ಮೈಗೂಡಿಸಿಕೊಂಡಿರುವ ಈ ಎಳೆಯ 'ಕೊರಳು' ನೊಂದ ಬೆಂದವರ ಉಸಿರು. ಕನ್ನಡ ಹಾಗೂ ತೆಲುಗಿನ ಬಹಳಷ್ಟು ಕ್ರಾಂತಿಕಾರಿ ಹಾಡುಗಳನ್ನು ಕಲಿತು ಹಾಡುವ ಈಕೆ ಕೋಲಾರದ ದಲಿತ ವಿದ್ಯಾರ್ಥಿನಿಯರ ಸಂಘಟನೆಯ ಮುಂಚೂಣಿಯಲ್ಲಿದ್ದಾಳೆ. []

# ಅಗ್ರಹಾರ ಘಟನೆ.......

[5ನೇ ಪುಟದಿಂದ]

ಸುಮಾರು ಎಂಟು ವರ್ಷಗಳ ಹಿಂದೆ 'ಶಕ್ತದಲಿತ'ರಿಂದ ಸಾಮಾಜಿಕ ಸ್ಥಾನ ಮಾನಕ್ಕಾಗಿ ಮೊದಲ ಹೋರಾಟ ನಡೆಯಿತು. ಸಾರ್ವಜನಿಕ ಬಾವಿಯಿಂದ ನೀರು ಮೊಗೆಯಲು ಹೋದಾಗ ಸಹಿಸದ ಸವರ್ಣೀಯರು ತಡೆಯೊಡ್ಡಿದರು. ಲಘು ಘರ್ಷಣೆ ಆಯಿತು. ಮಾಲೂರು ಪೋಲೀಸು ಠಾಣೆಗೆ ದೂರು ಹೋಗಿ 52 ಮಂದಿ ಸವರ್ಣೀಯರ ಬಂಧನವಾಯಿತು.

ಅಂದಿನಿಂದ ತಮ್ಮ ಪ್ರತಿಷ್ಠೆಗೆ ಭಂಗತಂದ ಎಚ್ಚೆತ್ತ ದಲಿತರ ಮಟ್ಟ ಹಾಕುವ ಯೋಜನೆಗಳು ಒಕ್ಕಲುಗೇರಿಯಲ್ಲಿ ತ್ವರಿತವಾಗಿ ನಡೆದವು. ಯೋಜನೆಯ ಮೊದಲ ಹಂತವಾಗಿ 'ಶಕ್ತದಲಿತ'ರಲ್ಲಿಯ ಹಿರಿಯನೊಬ್ಬನ ಕೊಲೆ ಯತ್ನ ನಡೆಯಿತು. ಭೂಮಾಲೀಕರು ಹಾರಿಸಿದ ಗುಂಡು ಎದೆಗೆ ಬದಲು ತೋಳ ಹೊಕ್ಕಿತ್ತು. ಗುಂಡನ್ನು ಹೊರತೆಗೆಯಲಾಯಿತು. ಭಾರೀ ಹಗರಣವಾಗಬೇಕಾಗಿದ್ದ ಇದು ತೀರಾ ಗುಪ್ತವಾಗಿ 'ರಾಜಿ'ಯಲ್ಲಿ ಕೊನೆಗೊಂಡಿತು.

**ಒಡೆದು ಆಳುವ ನೀತಿ**

ಭೂಮಾಲೀಕರ ಕೆಂಗಣ್ಣಿಗೆ ಬೆದರಿ 'ಅಶಕ್ತದಲಿತ'ರು ಅವರ ಕೈಗೊಂಬೆಗಳಾದರು. ಇದು ಅವರ ಬದುಕಿನ ಪ್ರಶ್ನೆಯೂ ಆಗಿತ್ತು. ಅರೆಬರೆ ಹಣ ಕಾಸು ನೆರವು ಇತ್ಯಾದಿ ಕಪಟ ಮೋಸಗಳಿಂದ ಭೂಮಾಲೀಕರು ಅವರನ್ನು ಹಂಗಿನ ಗುಲಾಮರನ್ನಾಗಿಸಿಕೊಂಡರು. ಈ ಮಧ್ಯೆ ಇದ್ದ ಕೇವಲ $2\frac{1}{2}$ ಎಕರೆ ಗೋಮಾಳವನ್ನು 'ಶಕ್ತದಲಿತರು' ದರಖಾಸ್ತಿನಲ್ಲಿ ಮಾಡಿಕೊಂಡರು. 'ಅಶಕ್ತರ'ನ್ನು ಸೋದರರಂತೆ ಕಂಡು ಭಾವನಾತ್ಮಕವಾಗಿ ಬೆರೆಯುವುದರ ಬದಲು ಕೀಳಾಗಿ ಕಾಣತೊಡಗಿದರು. ಇದು ಇವರಿಬ್ಬರ ನಡುವಿನ ಬಾಂಧವ್ಯದ ಬಿರುಕಿಗೆ ಮುಖ್ಯ ಕಾರಣ.

**ಚಂದ್ರ ಗ್ರಹಣದ ದಿನ**

ಚಂದ್ರ ಗ್ರಹಣದ ದಿನ ಪ್ರಾಣಿ ಬಲಿ ಅಲ್ಲಿಯ ಪದ್ಧತಿ. ಅಂದಿನ ಪೂಜಾ ಕಾರ್ಯದಲ್ಲಿ ದಲಿತರ ಸೇರ್ಪಡೆ. ಇದನ್ನು ಪ್ರತಿಭಟಿಸಿ 'ಶಕ್ತರು' ಮತ್ತವರ ಬೆಂಬಲಿಗರು ಪ್ರತಿ ಮನೆಗೆ ಹಾಕಿದ 'ವರವೆ' (ವಂತಿಗೆ) ಕೊಡಲು ನಿರಾಕರಿಸಿದರು.

ಇಂತಹ ನೆಪವೊಂದಕ್ಕೆ ಕಾದಿದ್ದ ಊರ ಪ್ರಮುಖರು ಅವರಿಗೆ ಸಾಮಾಜಿಕ ಬಹಿಷ್ಕಾರ ಹಾಕಿದರು. ಇದರಿಂದ ಮೊದಲು ಲಭ್ಯವಿದ್ದ ಕನಿಷ್ಟ ಸಾಮಾಜಿಕ ಸೌಲಭ್ಯಗಳಿಂದ ಕೂಡ ವಂಚಿತರಾಗಬೇಕಾಯಿತು. ಮುಂಚೆಯಿಂದ ಇದ್ದ ದೇವಸ್ಥಾನ ಪ್ರವೇಶ ನಿಷೇದ, ಹೋಟೆಲುಗಳಲ್ಲಿ ಪ್ರತ್ಯೇಕ ಲೋಟ ಇತ್ಯಾದಿಗಳ ಜತೆಗೆ ಅಂಗಡಿಗಳಲ್ಲಿ ದಿನಸಿ ನಿರಾಕರಣೆ, ಕಾಲು ಹಾದಿಗಳ ಬಳಕೆಗೆ ತಡೆ ಮುಂದುವರಿಯಿತು. ಗೋಕುಂಟೆಯಲ್ಲಿ ದನಗಳಿಗೆ ನೀರುಕುಡಿಸಲು ಅಡ್ಡಿ ಮಾಡಿದರು. ದಾರಿಕಾಣದ ಅವರು ಮತ್ತೊಮ್ಮೆ ಪೋಲೀಸ್ ಠಾಣೆ ಹತ್ತಿದರು.

ಅಗ್ರಹಾರಕ್ಕೆ ಭೇಟಿ ನೀಡಿದ ಪೋಲೀಸರು ಬಹಿಷ್ಕಾರದ ಬಗ್ಗೆ ಕ್ರಮ ತೆಗೆದುಕೊಳ್ಳದೆ ದೇವಸ್ಥಾನ ಪ್ರವೇಶಮಾಡಿಸಿದರು. ಕುಪಿತಗೊಂಡ ಸವರ್ಣೀಯರು ತಡೆಯ ಲೆತ್ನಿಸಿದರು. ಆದರೂ ಅವರ ಯತ್ನ ವಿಫಲವಾಯಿತು.

**ಒತ್ತಾಯ–ನಿರ್ಲಕ್ಷ್ಯ**

ನಂತರ ದೇವಸ್ಥಾನ ಹೊಕ್ಕು ಬಂದವರ ಮನೆಗಳ ಮೇಲೆ ನಿತ್ಯ ರಾತ್ರಿ ಕಲ್ಲುಗಳ ಸುರಿಮಳೆಯಾಯಿತು. ಈ ನಡುವೆ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ಅಗ್ರಹಾರಕ್ಕೆ ಭೇಟಿ ನೀಡಿದರು. ಬಹಿಷ್ಕಾರ ಹಿಂತೆಗೆಸಿ ಅಲ್ಲಿನ ಸ್ಫೋಟಕ ಸ್ಥಿತಿಯನ್ನು ಹತೋಟಿಗೆ ತರುವಂತೆ ಸರಕಾರವನ್ನು ಒತ್ತಾಯಿಸಿದರು. ಆದರೆ ಪೋಲೀಸ್ ಸೇರಿದಂತೆ ಸರ್ಕಾರ ತನ್ನ ನಿರ್ಲಕ್ಷ್ಯ ಮುಂದುವರಿಸಿತು.

ಭೂಮಾಲೀಕರಿಗೆ ಉಳಿದದ್ದು ತಮ್ಮ ತಾಳಕ್ಕೆ ಕುಣಿಯುತ್ತಿದ್ದ 'ಅಶಕ್ತ'ದಲಿತರನ್ನು ಬಳಸಿಕೊಂಡು 'ಶಕ್ತ'ದಲಿತರನ್ನು ಬಗ್ಗುಬಡಿಯುವುದು. ಅಂತು ಹೊಲಗೇರಿಯನ್ನು ಒಂದು ದಿನ ಮಸಣ ಮಾಡಿದರು. ತಮ್ಮ ಪಿತೂರಿಯಲ್ಲಿ ಯಶಸ್ವಿಯೂ ಆದರು.

ಈಗ ಅಗ್ರಹಾರದ ದುಡಿವ ಕಡು ಬಡಜನ ಬಂಧನದಲ್ಲಿದ್ದಾರೆ. ದುಡಿದ ಕೈಗಳನ್ನೇ ನಂಬಿದ್ದವರಿಂದುಗಂಜಿ ಕಾಣದೆ ಹಸಿದಿದ್ದಾರೆ. ಅಸುನೀಗಿದ ಜೀತಗಾರ ಕೃಷ್ಣಪ್ಪ ಮೂವರು ಮಕ್ಕಳನ್ನು ಅಗಲಿದ್ದಾನೆ. ಬದುಕಲು ಅಂಗೈ ಅಗಲದ ನೆಲವೂ ಇಲ್ಲ. ಈ ಅನಾಥರ ಗೋಳು ಕೇಳುವವರೇ ಇಲ್ಲ.

# ಸ್ವರಕ್ಷಣೆಯ ಸಾಮರ್ಥ್ಯ: 'ಸಮತಾ ಸೈನಿಕ ದಳ'ದ ಗುರಿ

ಸಮತಾ ಸೈನಿಕ ದಳವನ್ನು ಡಾ॥ ಅಂಬೇಡ್ಕರ್‌ರವರು 1929ರಲ್ಲಿ ಹುಟ್ಟುಹಾಕಿದರು. ದಲಿತರನ್ನು ಸವರ್ಣೀಯರ ದಾಳಿಯಿಂದ ಪಾರುಮಾಡಬೇಕು. ಯಾರನ್ನೂ ಅವಲಂಬಿಸದೆ ತಮ್ಮನ್ನು ತಾವೇ ರಕ್ಷಣೆಮಾಡಿಕೊಳ್ಳಬೇಕು ಎಂಬುದು ಈ ಸೈನಿಕ ದಳದ ಗುರಿ. ಈ ಕೆಲಸಕ್ಕಾಗಿ ದಲಿತರನ್ನು ಶಾರೀರಿಕ. ಬೌದ್ಧಿಕವಾಗಿ ತಯಾರುಮಾಡುವ ಮಹತ್ತರವಾದ ಹೊಣೆ ಸಮತಾ ಸೈನಿಕ ದಳದ್ದು. ಅನೇಕ ವರ್ಷಗಳ ನಂತರ ಸಮತಾ ಸೈನಿಕದಳ ಮತ್ತೆ ಕ್ರಿಯಾಶೀಲವಾಗಿದೆ. ಇಡೀ ಇಂಡಿಯಾದ ಉದ್ದಗಲಕ್ಕೂ ಭಯಗ್ರಸ್ತ ಜೀವನವನ್ನು ಸಾಗಿಸುತ್ತಿರುವ ದಲಿತರಲ್ಲಿ ಧೈರ್ಯತುಂಬಿ ಅವರಲ್ಲಿ ಸ್ವರಕ್ಷಣೆಯ ಸಾಮರ್ಥ್ಯವನ್ನು ಉಂಟುಮಾಡುವ ಕೆಲಸದಲ್ಲಿ ಸಮತಾ ಸೈನಿಕ ದಳ ನಿರತವಾಗಿದೆ.

ಡಿಸೆಂಬರ್ 1978ರ 9 ಮತ್ತು 10ರಂದು ಸಮತಾ ಸೈನಿಕ ದಳದ ಸಮ್ಮೇಳನ ದೆಹಲಿಯಲ್ಲಿ ಜರುಗಿತು. ನಾನಾ ರಾಜ್ಯಗಳಿಂದ ನೂರಾರು ಪ್ರತಿನಿಧಿಗಳು, ದಳದ ಸೈನಿಕರು ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ವಿವಿಧ ರಾಜ್ಯಗಳ ಸೈನಿಕ ದಳಗಳು ತಾವುಪಡೆದ ತರಪೇತಿಯನ್ನ ಪ್ರದರ್ಶನ ಮಾಡಿದವು. ಜಮೀನುದಾರರ ದಾಳಿಗೆ ಸಿಕ್ಕಿ ನುಚ್ಚುನೂರಾಗಿ ಸತ್ತು ಹೋಗುತ್ತಿರುವ ದಲಿತರನ್ನು ಉಳಿಸಬೇಕು ಎಂಬ ಪ್ರಾಮಾಣಿಕ ಕಳಕಳಿ ಇಲ್ಲಿ ಎದ್ದು ಕಂಡ ಅಂಶ. ಒಬ್ಬ ದಲಿತ ತಮಿಳುನಾಡಿನಲ್ಲಿರಲಿ ಕಾಶ್ಮೀರದಲ್ಲಿರಲಿ ಅವನ ಭಾವನೆಗಳು, ಆಲೋಚನೆಗಳು, ಒಂದೇ ರೀತಿಯಾಗಿವೆ. ಯಾಕೆಂದರೆ ಭಾರತದ ಎಲ್ಲ ದಲಿತರೂ ಹೆಚ್ಚು ಕಡಿಮೆ ಒಂದೇ ಬಗೆಯ ಶೋಷಣೆಗೆ ಒಳಗಾಗಿದ್ದಾರೆ. ಅವರೆಲ್ಲರೂ ಈಗ ಸಂಘಟನೆಯನ್ನು ಬಯಸುತ್ತಾರೆ. ಅವರೆಲ್ಲರೂ ಪ್ರೀತಿಸುತ್ತಿರುವುದು ಕ್ರಾಂತಿಯನ್ನು. ಶ್ರೀಮಂತರ ಬಗ್ಗೆ ಜಾತಿಪದ್ಧತಿಯ ಬಗ್ಗೆ ದೇಶದ ಎಲ್ಲಾ ಭಾಗದ ಪ್ರಜ್ಞಾವಂತ ದಲಿತರೂ ಸಿಟ್ಟಾಗಿದ್ದಾರೆ. ಸಂಘಟನೆಯೊಂದೇ ಈ ರೋಗಕ್ಕೆ ಮದ್ದೆಂದು ಇವರೆಲ್ಲರ ಭಾವನೆ. ಇದು ಸಮತಾ ಸೈನಿಕದಳದ ಸಮ್ಮೇಳನದ ಅವಲೋಕನದಿಂದ ವ್ಯಕ್ತವಾದ ವಿಚಾರ.

ಈ ದೇಶದ ಪ್ರತಿಯೊಬ್ಬ ದಲಿತನೂ ಸೈನಿಕನಾಗಿ ಹೋರಾಟ ಮಾಡಬೇಕಾದ ಕಾಲ ದೂರವಿಲ್ಲ. ಇವನ ಹೋರಾಟ ಇತರ ಜಾತಿಯ ಬಡವರ ವಿರುದ್ಧವಲ್ಲ. ಎಲ್ಲ ಜಾತಿಯಲ್ಲಿರುವ ಶೋಷಕರ ವಿರುದ್ಧ. ಆದ್ದರಿಂದ ಎಲ್ಲ ಜಾತಿಯ ಬಡವರು ದಲಿತನ ಗೆಳೆಯರು, ಇವರೆಲ್ಲ ಜಾತಿಪದ್ಧತಿಯ ಪರದೆಯನ್ನು ಹರಿದಾಗ ಮಾತ್ರ ವರ್ಗ ಹೋರಾಟದ ಮುನ್ನಡೆ ಸಾಧ್ಯ. ಆದ್ದರಿಂದ ಸಮತಾ ಸೈನಿಕ ದಳ ಜಾತಿ-ವರ್ಗ ಹೋರಾಟವನ್ನು ಬೆಂಬಲಿಸುತ್ತದೆ.

ಅಖಿಲಭಾರತ ಮಟ್ಟದಲ್ಲಿ ದಲಿತ ಯುವಕರಲ್ಲಿ ಮೂಡಿರುವ ಎಚ್ಚರ ಕರ್ನಾಟಕದಲ್ಲೂ ಮೂಡಲಿ ಎಂಬ ಅಭಿಲಾಷೆ ನಮ್ಮದು. □

---

## 'ಬೆಲ್ಚಿ' ಪುನರಾವರ್ತನೆ

[5ನೇ ಪುಟದಿಂದ]

ಸುಮಾರು 15 ಎಕರೆಗೂ ಹೆಚ್ಚು ಜಮೀನಿಗಾಗಿ ಭೂಮಾಲೀಕ ಮತ್ತು ಹರಿಜನರ ನಡುವೆ ಈ ಘಟನೆ ನಡೆಯಿತು. ಈ ಘಟನೆಯಲ್ಲಿ ಹರಿಜನರಾದ ಮತ್ತು ಗ್ರಾಮದ ಮುಖ್ಯಸ್ಥ ಬಾಲಗೋವಿಂದ ಪಾಸ್ವಾನ್. ಆತನ ಮಗ ದೋಮನ್ ಪಾಸ್ವಾನ್ ಹಾಗೂ ಧನಿಮಂಜಿ ಎಂಬ ಮೂವರ ಶಿರಚ್ಛೇದನ ಮಾಡಲಾಯಿತು. ಭೂಮಾಲೀಕನ ದುಷ್ಕೃತ್ಯಗಾರರ ಆಯುಧಗಳ ಏಟಿನಲ್ಲಿ ಸಾವಿನಿಂದ ಪಾರಾದ ರಾಮಚಂದ್ರ ಪಾಸ್ವಾನ್ ತೀವ್ರ ಗಾಯಗೊಂಡ.

ಹದಿನೈದು ಎಕರೆ ಭೂಮಿಯು ಹರಿಜನರಿಗೆ ಸೇರಿದ್ದರೂ ಅದು ತಮ್ಮದೆಂದು ಹೇಳಿಕೊಳ್ಳದಂತೆ ಅವರನ್ನು ಕೊಲ್ಲುವ ಮೂಲಕ ಅವರಲ್ಲಿ ಭಯೋತ್ಪಾದನೆ ಮಾಡುವುದು ಭೂಮಾಲೀಕನ ಸಂಚಾಗಿತ್ತು.

ಭೂಮಾಲೀಕನ ಸಶಸ್ತ್ರ ಹೊಂದಿದ ಗುಂಪು ಡಿಸೆಂಬರ್ 7ರಂದು ರಾತ್ರಿ ಕೊರೆಯುವ ಚಳಿಯಲ್ಲಿ ಹರಿಜನರ ಬಿಸಿರಕ್ತವನ್ನು ಚೆಲ್ಲಲು ಕೇರಿಯತ್ತ ನುಗ್ಗಿ ಮೊದಲು ರಾಮಚಂದ್ರಪಾಸ್ವಾನ್ ಮೇಲೆ ಗುಂಡು ಹಾರಿಸಿತು. ಗುಂಡಿನೇಟಿನಿಂದ ಆತನ ರಕ್ತ ನೆಲಕ್ಕೆ ಚಿಮ್ಮಿತು. ಅಲ್ಲದೆ ತೀವ್ರ ಗಾಯಗೊಂಡ.

### ಎಸ್. ಪಿ. ಭೇಟಿ ನಿರಾಕರಣೆ

ಗುಂಡು ಹಾರಿಸಿದ ಈ ಘಟನೆ ಬಗ್ಗೆ ಮರುದಿನ ಬೆಳಿಗ್ಗೆ ರಾಮಚಂದ್ರ ಪಾಸ್ವಾನ್‌ನ ನಾದಿನಿ ಪುಹಿಯಾದೇವಿ ದೂರು ನೀಡಲು ಹತ್ತಿರದ ಚಾಂಡಿ ಪೋಲೀಸ್ ಠಾಣೆ ಹತ್ತಿದಳು. ಆದರೆ ಅವಳ ದೂರನ್ನು ಪೋಲೀಸರು ಮನ್ನಿಸಲಿಲ್ಲ. ದುಃಖತಪ್ತಳಾಗಿದ್ದ ಆಕೆ ನಿರಾಶಳಾಗದೆ ಪೋಲೀಸ್ ಸೂಪರಿಂಟೆಂಡೆಂಟ್ ಕಾಣಲು ನಳಂದಕ್ಕೆ ಹೋದಳು. ಆದರೆ ಅಲ್ಲಿ ಎಸ್. ಪಿ. ಆಕೆಗೆ ಸಂದರ್ಶನ ನೀಡಲು ನಿರಾಕರಿಸಿದ.

### ದೋಮನ್ ಮೊದಲ ಬಲಿ

ರಾಮಚಂದ್ರ ಪಾಸ್ವಾನ್ ಮೇಲೆ ಗುಂಡು ಹಾರಿಸಿ ಹೋಗಿದ್ದ ಅದೇ ಗುಂಪು ಮರುದಿನ ಅಂದರೆ ಡಿಸೆಂಬರ್ 9ರಂದು ಮತ್ತಷ್ಟು ಸಶಸ್ತ್ರ ಸಜ್ಜಿತವಾಗಿ 300 ಮಂದಿ ಬಲಾಢ್ಯರು ಹಾಡು ಹಗಲಲ್ಲೇ ಹರಿಜನ ಕೇರಿಗೆ ನುಗ್ಗಿದರು. ಭೂಮಿಯ ಒಡೆಯರಲ್ಲೊಬ್ಬನಾಗಿದ್ದ ದೋಮನ್ ಪಾಸ್ವಾನ್‌ನ ಬಲಿಗಾಗಿ ಗುಂಪು ಕಣ್ಣಿಗೆ ಕಣ್ಣಿಟ್ಟು ಮನೆಗಳನ್ನು ಶೋಧಿಸಿತು. ರಕ್ಷಣೆಗಾಗಿ ಸುಖನಂದನ್ ರಬಿದಾಸ್ ಎಂಬಾತನ ಮನೆ ಹೊಕ್ಕಿದ್ದ ಪಾಸ್ವಾನ್‌ನನ್ನು ಕಂಡು ದುಷ್ಕೃತ್ಯಕಾರರು ಹಿಗ್ಗಿ ಆತನನ್ನು ಹೊರಗೆಳೆದು ತಂದು ಜಳಜಳಪಿಸುತ್ತಿದ್ದ ಅವರ ಕತ್ತಿ ಮಚ್ಚುಗಳಿಂದ ಆತನ ಕತ್ತನ್ನು ಕತ್ತರಿಸಿದರು. ತುಂಡಾದ ಆತನ ತಲೆರಹಿತ ದೇಹವನ್ನು ಊರಿನ ಹೊರಭಾಗದಲ್ಲಿ ಎಸೆದರು, ಆದರೆ ಕತ್ತರಿಸಿದ ತಲೆಯನ್ನು ಅಲ್ಲಿನ ಪೊದೆಯೊಂದರ ಅಡಿಯಲ್ಲಿ ಹೂಳಿದರು.

### ಸತ್ತರೂ ತೃಪ್ತಿ ಇಲ್ಲ

ಸುಸಜ್ಜಿತ ಈ ದುಷ್ಕೃತ್ಯಗಾರರ ನಂತರದ ಬಲಿಪಶು ಧನಿಮಂಜಿ ಎಂಬಾತ. ತಾವು ಹೊಂದಿದ್ದ ಶಸ್ತ್ರಗಳಿಂದ ತಿವಿದು ಹೊಡೆದು ಧನಿಮಂಜಿಯನ್ನು ಕೊಂದರು. ಆತ ಸತ್ತರೂ ಅವರಿಗೆ ತೃಪ್ತಿ ಸಿಗದೆ ಹೆಣದ ಕತ್ತನ್ನು ಕತ್ತರಿಸಿದರು. ಮೂರನೆ ಬಲಿ ಪಶು ಭೂಮಾಲಿಕನ ಪ್ರಮುಖ ವಿರೋಧಿ ಗ್ರಾಮದ ಚೌಕಿದಾರ ಬಾಲಗೋವಿಂದಪಾಸ್ವಾನ್. ಮೊದಲೇ ಕೊಲೆಗೀಡಾದ ದೋಮನ್ ಪಾಸ್ವಾನನ ತಂದೆ. ಬಾಲಗೋವಿಂದ ಪಾಸ್ವಾನನ ಕೊಂದ ದುಷ್ಕೃತ್ಯಕಾರರು ತಮ್ಮ ಕೆಲಸ ಮುಗಿಯಿತೆಂಬ ಹರ್ಷದಿಂದ ಹಿಗ್ಗಿ ಹರಿಜನರ ವಿರುದ್ಧ ಘೋಷಣೆ, ತಮ್ಮ ಒಡೆಯ ಭೂಮಾಲೀಕನಿಗೆ ಜಯಕಾರ ಹಾಕಿಕೊಂಡು ಓಡಿದರು.

ಸೌಜನ್ಯ : ಹಿಂದೂ

# ದ.ಸ.ಸ. ಕಾರ್ಯಕರ್ತರ ತರಬೇತಿ ಶಿಬಿರ

## ಪ್ರವಾಸಿ ಬಂಗಲೆ, ನಾಮದ ಚಿಲುಮೆ, ತುಮಕೂರು

| ಬೆಳಿಗ್ಗೆ | ಮಧ್ಯಾಹ್ನ |
|---|---|
| **16-1-1979** | |
| ಉದ್ಘಾಟನೆ : ವಿಜಯ ಪಾಟೀಲ್ | ಉಪನ್ಯಾಸ : ಬಿ. ಕೃಷ್ಣಪ್ಪ |
| ಅಧ್ಯಕ್ಷತೆ : ಎಂ. ಮರಿಸ್ವಾಮಿ | ದಲಿತ ಸಂಘಟನೆ ಏಕೆ ಹೇಗೆ ? |
| ಉಪನ್ಯಾಸ : ಭಗವಾನ್ ದಾಸ್ ಅಂಬೇಡ್ಕರ್ ವಿಚಾರಧಾರೆ. | |
| **17-1-1979** | |
| ಉಪನ್ಯಾಸ : ಎಂ. ಡಿ. ನಂಜುಂಡಸ್ವಾಮಿ ಹಿಂದೂ ಧರ್ಮದಲ್ಲಿ ಶೋಷಣೆ ಮತ್ತು ಸಮಾಜವಾದ | ಉಪನ್ಯಾಸ : ದೇವನೂರ ಮಹದೇವ ದಲಿತ ಹುಟ್ಟು ಬೆಳವಣಿಗೆ ಮತ್ತು ಹೋರಾಟ |
| ಉಪನ್ಯಾಸ : ಇಂದೂಧರ ಹೊನ್ನಾಪುರ ದಲಿತ ಪ್ಯಾಂಥರ್ಸ್ | |
| **18-1-1979** | |
| ಉಪನ್ಯಾಸ : ಜಿ. ರಾಮಕೃಷ್ಣ ವೈಜ್ಞಾನಿಕ ದೃಷ್ಟಿಯಲ್ಲಿ ಸಮಾಜದ ಬೆಳವಣಿಗೆ | ಉಪನ್ಯಾಸ : ಲಕ್ಷ್ಮೀನಾರಾಯಣ ಮಾವೊ ವಿಚಾರಧಾರೆ |
| ಉಪನ್ಯಾಸ : ಪಿ ರಾಮಚಂದ್ರ ರಾವ್ ರಾಜಕೀಯ ಅರ್ಥಶಾಸ್ತ್ರ | |
| **19-1-1979** | |
| ಉಪನ್ಯಾಸ : ಡಿ. ಆರ್. ನಾಗರಾಜ ನಕ್ಸಲೀಯ ಚಳುವಳಿ | ಉಪನ್ಯಾಸ : ಎಂ. ಕೆ. ಭಟ್ ಎಡಪಂಥೀಯ ರಾಜಕೀಯ ಪಕ್ಷಗಳು ಮತ್ತು ಹೋರಾಟ |
| ಉಪನ್ಯಾಸ : ವಿ. ಜಿ. ಕೆ. ನಾಯರ್ ರಷ್ಯ ವಿಯಟ್ನಾಂಗಳ ಹೋರಾಟದ ಇತಿಹಾಸ | |
| **20-1-1979** | |
| ಉಪನ್ಯಾಸ : ಎಚ್. ಜಿ. ಸಣ್ಣಗುಡ್ಡಯ್ಯ ಸಾಹಿತ್ಯ ಮತ್ತು ಹೋರಾಟ | ಉಪನ್ಯಾಸ : ಸುಮಿತ್ರಾಬಾಯಿ ಶೋಷಣೆ ಮತ್ತು ದಲಿತ ಮಹಿಳೆ |
| ಉಪನ್ಯಾಸ : ಶ್ರೀಧರನ್ ಕಾನೂನು ಮತ್ತು ಸ್ವಾತಂತ್ರ್ಯ | |
| **21-1-1979** | |
| ಉಪನ್ಯಾಸ : ಕೆ. ನಾರಾಯಣಸ್ವಾಮಿ ಪ್ರತಿಗಾಮಿ ಸಿದ್ಧಾಂತಗಳು | ಚರ್ಚೆ ಮತ್ತು ನಿರ್ಣಯ |
| ಉಪನ್ಯಾಸ : ಸಿದ್ದಲಿಂಗಯ್ಯ ಜಾತಿ ಪದ್ಧತಿ ಮತ್ತು ಹೋರಾಟ | |

ಬೆಂಗಳೂರು ಸಮುದಾಯದ ಸಾಂಸ್ಕೃತಿಕ ದಳ, ಆಂಧ್ರ ಪ್ರದೇಶ ಸಾಂಸ್ಕೃತಿಕ ದಳ ಮತ್ತು ಮೈಸೂರು ಸಾಂಸ್ಕೃತಿಕ ದಳಗಳಿಂದ ಪ್ರತಿದಿನ ರಾತ್ರಿ 7ಗಂಟೆಗೆ ತರಬೇತಿ ನೀಡಲಾಗುವುದು.

ವ್ಯವಸ್ಥಾಪಕರು:
**ಕರ್ನಾಟಕ ದಲಿತ ಸಂಘರ್ಷ ಸಮಿತಿ**
**ಜಿಲ್ಲಾ ಶಾಖೆ ತುಮಕೂರು**

# ಪೋಲೀಸರ ಕ್ರೂರ ದೌರ್ಜನ್ಯ

[3ನೇ ಪುಟದಿಂದ]

ಕುಪಿತರಾಗಿ ಸುಮಾರು 20ಕ್ಕೂ ಹೆಚ್ಚು ರೂಮುಗಳ ಬಾಗಿಲ ಮೇಲಿನ ಕಿಟಕಿ ಗಾಜುಗಳನ್ನು ಲಾಠಿಗಳಿಂದ ಒಡೆದು ಚೂರು ಮಾಡಿದ್ದಾರೆ. ಬಲಿಗಾಗಿ ಬಂದವರಂತೆ ತಮ್ಮ ಬೂಟುಗಾಲಿನಿಂದ ಮುಚ್ಚಿದ್ದ ಬಾಗಿಲುಗಳನ್ನು ಹೊದ್ದು ಒಳಗಿದ್ದ ವಿದ್ಯಾರ್ಥಿಗಳನ್ನು ಚೆನ್ನಾಗಿ ಹೊಡೆದಿದ್ದಾರೆ. ಅಮಲಿನಿಂದಲೂ, ಕೋಪದಿಂದಲೂ ಕೆಲ ವಿದ್ಯಾರ್ಥಿಗಳ ಕೆನ್ನೆ ಕಚ್ಚಿದ್ದಾರೆ. "ಬೋಳಿ ಮಕ್ಳೆ ನಿಮ್ಮನ್ನೆಲ್ಲ ಪ್ರಜಾಪ್ರಭುತ್ವದಲ್ಲಿ ಸುಟ್ಟುಬಿಡಬೇಕು" "ಹರಿಜನರಿಗೆ ಹಾಸ್ಟಲಿನಲ್ಲಿ ತಿಂದು ಕೊಬ್ಬು" ಎಂದು ಬಾಯಿಗೆ ಬಂದಹಾಗೆ ಸಿಕ್ಕಾಬಟ್ಟೆ ಬೈದು ವಿದ್ಯಾರ್ಥಿಗಳನ್ನು ಹೊಡೆದಿದ್ದಾರೆ. ಬಿ. ಎನ್. ಶಿವಕುಮಾರ್ ಎಂಬ ವಿದ್ಯಾರ್ಥಿಯನ್ನು ಅರೆ ಪ್ರಜ್ಞಾವಸ್ಥೆಗೆ ಬರುವ ಹಾಗೆ ಥಳಿಸಿ ಹಾಸ್ಟೆಲಿನ ಮೆಟ್ಟಿಲುಗಳ ಮೇಲೆ ಮಲಗಿಸಿ ತುಳಿದುಕೊಂಡೆ ಓಡಾಡಿದರಂತೆ.

### ಹಣದ ದರೋಡೆ ಷಲ್ ಪ್ರಯೋಗ

ಇದಿಷ್ಟೇ ಅಲ್ಲದೆ 196ನೇ ಕೊಠಡಿಯಲ್ಲಿ ವೆಂಕಟರಮಣಪ್ಪ ಎಂಬ ವಿದ್ಯಾರ್ಥಿಯ 818ರೂಪಾಯಿಗಳನ್ನು ದೋಚಿದ್ದಾರೆ (ಸೈನಿಕ ಪಡೆಯಲ್ಲಿರುವ ಅವರ ಅಣ್ಣ ಮನೆಗೆ ತಲುಪಿಸುವಂತೆ ಅಂದು ಬೆಳಿಗ್ಗೆ ಹಣಕೊಟ್ಟು ಹೋಗಿದ್ದರು.) ಆತ ಮತ್ತು ಇನ್ನೊಬ್ಬ ವಿದ್ಯಾರ್ಥಿಯ ಕೈ ಗಡಿಯಾರವನ್ನು ಲಾಠಿಯಿಂದ ಹೊಡೆದು ನಜ್ಜುಗುಜ್ಜು ಮಾಡಿದ್ದಾರೆ. ಪೋಲೀಸರು ಒಟ್ಟು 6 ಅಶ್ರುವಾಯು ಷೆಲ್‌ಗಳನ್ನು ಸಿಡಿಸಿದ್ದಾರೆ. ಸಿಡಿದಿರುವ ಗ್ರೇನೇಡ್‌ಗಳು ಈಗ ವಿದ್ಯಾರ್ಥಿಗಳ ವಶದಲ್ಲಿವೆ.

ಸುಮಾರು ಅರ್ಧಗಂಟೆ ನಡೆಸಿದ ದೌರ್ಜನ್ಯದ ಕೈಗೆ ಸಿಕ್ಕಿದ 11ಮಂದಿ ವಿದ್ಯಾರ್ಥಿಗಳನ್ನು ಬಂಧಿಸಿ ಪೋಲೀಸ್ ಠಾಣೆಗೆ ಕರೆದೊಯ್ದರು. ನಾವು ಗಲಾಟೆಗೆ ಹೋಗಿಲ್ಲ ಎಂದಾಗ "ಮುಚ್ಕೊಂಡು ವ್ಯಾನ್ ಹತ್ತ್ರೋ ಮಗ್ನೆ" ಎಂದರು. ಅಲಸೂರು ಠಾಣೆಗೆ ಬಂದಿಳಿದಾಗಲೂ 'ಶರಣಾಗಿದ್ದೇವೆ' ಎಂದು ಬೇಡಿಕೊಂಡರೂ " ಶರಣೂ ಇಲ್ಲ ಶಾತಾನೂ ಇಲ್ಲ; ನಡಿರ್‍ರೋ ಒಳಕ್ಕೆ" ಎಂದು ದಬ್ಬಿದರೆಂದು ವಿದ್ಯಾರ್ಥಿಗಳು ತಮಗಾದ ಅನುಭವಗಳನ್ನು ವಿವರಿಸಿದರು.

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3. ಇಲ್ಲಿ ಮುದ್ರಿಸಲ್ಪಟ್ಟು ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು.
ವಿಳಾಸ: 5-ಎ. ವಾಣಿ ವಾಣಿಜ್ಯ ಶಾಲಾ, ಪತ್ರಕರ್ತರ ಕಾಲೋನಿ, ಬೆಂಗಳೂರು-560 002